

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | | 149 |
| ಮಾನ್ಯ ಸದಸ್ಯರ ಹೆಸರು | | ಶ್ರೀ ಸಿ.ಎಂ. ಇಬ್ರಾಹಿಂ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ಸಚಿವರು | | ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | | 13-12-2021 |
| ಪ್ರಶ್ನೆ | | ಉತ್ತರ |
| (ಅ) | ರಾಷ್ಟ್ರೀಯ ಶಿಕ್ಷಣ ನೀತಿಯಿಂದ ಭಾಷಾ ಅಲ್ಪಸಂಖ್ಯಾತರ ಮಾತೃಭಾಷೆಗೆ ದಕ್ಕೆ ಉಂಟಾಗುವ ಆತಂಕದ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಷ್ಟ್ರೀಯ ಶಿಕ್ಷಣ ನೀತಿಯಿಂದ ಭಾಷಾ ಅಲ್ಪಸಂಖ್ಯಾತರ ಮಾತೃಭಾಷೆಗೆ ದಕ್ಕೆ ಉಂಟಾಗುವುದಿಲ್ಲ.<br><br>ಪದವಿಯ ಮೊದಲ ಎರಡು ವರ್ಷಗಳ ನಾಲ್ಕು ಸೆಮಿಸ್ಟರ್‌ಗಳಲ್ಲಿ ಎರಡು ಭಾಷೆಗಳನ್ನು ವಿದ್ಯಾರ್ಥಿಗಳು ಕಲಿಯಬಹುದಾಗಿದೆ. ಶಾಲಾಮಟ್ಟದಲ್ಲಿ ಕನ್ನಡ |
| (ಆ) | ಹೊಸ ಶಿಕ್ಷಣ ನೀತಿಯಿಂದ ಭಾಷಾ ಅಲ್ಪಸಂಖ್ಯಾತ ವಿದ್ಯಾರ್ಥಿಗಳು ಓದದೇ ಇರುವ ಭಾಷೆಯನ್ನು ಸಹ ಓದುವ ಬಲವಂತದ ಒತ್ತಡದ ಬಗ್ಗೆ ಸರ್ಕಾರದ ನಿಲುವೇನು; | ಕಲಿತವರಿಗೆ ಮಾತ್ರ ಎರಡು ಭಾಷೆಗಳ ಪೈಕಿ ಒಂದು ಭಾಷೆಯಾಗಿ ಕನ್ನಡದ ಕಲಿಕೆಯನ್ನು ಎಲ್ಲಾ ನಾಲ್ಕು ಸೆಮಿಸ್ಟರ್‌ಗಳಲ್ಲಿ ಕಡ್ಡಾಯಗೊಳಿಸಲಾಗಿದೆ. ಇನ್ನೊಂದು ಭಾಷೆಯಾಗಿ ವಿದ್ಯಾರ್ಥಿಯು ತನ್ನ ಆಸಕ್ತಿಯ ಯಾವುದಾದರೂ ಭಾಷೆಯನ್ನು ಕಲಿಯಬಹುದಾಗಿದೆ.<br><br>ಕನ್ನಡ ನಾಡು, ನುಡಿ, ಸಂಸ್ಕೃತಿ, ಸಾಹಿತ್ಯದ ಬಗ್ಗೆ ಎಲ್ಲಾ ವಿದ್ಯಾರ್ಥಿಗಳಲ್ಲಿ ಅರಿವು ಮೂಡಲಿ ಎಂಬ ಉದ್ದೇಶದಿಂದ ಶಾಲಾಮಟ್ಟದಲ್ಲಿ ಕನ್ನಡ ಕಲಿತ ವಿದ್ಯಾರ್ಥಿಗಳಿಗೆ ಮಾತ್ರ ನಾಡಭಾಷೆ ಕನ್ನಡದ ಕಲಿಕೆಯನ್ನು ಕಡ್ಡಾಯಗೊಳಿಸಲಾಗಿದೆ.<br><br>ಆದರೆ, ಪಿಯುಸಿವರೆಗೆ ಯಾವುದೇ ಹಂತದಲ್ಲಿ ಕನ್ನಡವನ್ನೇ ಕಲಿಯದ ವಿದ್ಯಾರ್ಥಿಗಳಿಗೆ ಮತ್ತು ಹೊರ ರಾಜ್ಯದ/ಹೊರದೇಶದ ವಿದ್ಯಾರ್ಥಿಗಳಿಗೆ 'ವ್ಯವಹಾರಿಕ ಕನ್ನಡ' (Functional Kannada) ವನ್ನು ಮೊದಲ ವರ್ಷದ ಯಾವುದಾದರೂ ಒಂದು ಸೆಮಿಸ್ಟರ್‌ನಲ್ಲಿ ಮಾತ್ರ ಕಲಿಯಬೇಕಾಗಿದೆ. ಈ ಒಂದು ಸೆಮಿಸ್ಟರ್‌ನಲ್ಲಿ ಕನ್ನಡದ ಜೊತೆ ಈ ವಿದ್ಯಾರ್ಥಿಯು ತನ್ನ ಆಸಕ್ತಿಯ ಯಾವುದಾದರು ಒಂದು ಭಾಷೆಯನ್ನು ಕಲಿಯಬಹುದಾಗಿದೆ. ಭಾಷೆ ಕಲಿಯಬೇಕಾದ ನಾಲ್ಕು ಸೆಮಿಸ್ಟರ್‌ಗಳ ಪೈಕಿ ಇನ್ನುಳಿದ ಮೂರು ಸೆಮಿಸ್ಟರ್‌ಗಳಲ್ಲಿ ಸದರಿ ವಿದ್ಯಾರ್ಥಿಗಳು ತಮ್ಮ ಆಯ್ಕೆಯ ಯಾವುದೇ ಎರಡು ಭಾಷೆಗಳನ್ನು ಕಲಿಯಬಹುದಾಗಿರುತ್ತದೆ.<br><br>ವಿದ್ಯಾರ್ಥಿಗಳು ಭಾಷೆ/ಭಾಷೆಗಳನ್ನು ಆಯ್ಕೆ ಮಾಡಿಕೊಳ್ಳುವ ಸಂದರ್ಭದಲ್ಲಿ ಪ್ರತಿ ವರ್ಷ ಬೇರೆ ಬೇರೆ ಭಾಷೆ/ಭಾಷೆಗಳನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶವಿರುತ್ತದೆ.<br><br>ಕ್ರಿಯಾತ್ಮಕ ಕನ್ನಡವು ಈ ವಿದ್ಯಾರ್ಥಿಗಳಿಗೆ ದಿನ ನಿತ್ಯದ ಸಂವಹನದಲ್ಲಿ ಸಹಾಯ ಮಾಡಲು ನಿರ್ದಿಷ್ಟವಾಗಿ ವಿನ್ಯಾಸಗೊಳಿಸಲಾದ ಪ್ರತ್ಯೇಕ ಪಠ್ಯಕ್ರಮವನ್ನು ಹೊಂದಿದೆ. ಇದು ಕರ್ನಾಟಕದಲ್ಲಿ ಈ ವಿದ್ಯಾರ್ಥಿಗಳನ್ನು ಒಟ್ಟುಗೂಡಿಸಲು ಸಹಾಯಕವಾಗಿದೆ ಮತ್ತು ಸ್ಥಳೀಯ ಜನರೊಂದಿಗೆ ಸಂವಹನ ನಡೆಸಲು ಸಹಾಯಕವಾಗಿದೆ.<br><br>ಹೊರ ರಾಜ್ಯದ/ಹೊರದೇಶದ ವಿದ್ಯಾರ್ಥಿಗಳಿಗೆ ಇದು ಅನುಕೂಲ ವಾಗಲಿದ್ದು, ವಿಶೇಷವಾಗಿ ರಾಜ್ಯದ ಜನರೊಂದಿಗೆ ಬೆರೆಯಲು, ವ್ಯವಹಾರ/ ಉದ್ಯೋಗ ಮತ್ತು ಸರ್ಕಾರದ ಸೌಲಭ್ಯಗಳನ್ನು ಪಡೆಯುವ ದಿಸೆಯಲ್ಲಿ ಇದು ಸಹಕಾರಿಯಾಗಲಿದೆ.<br><br>**(ವಿವರಗಳನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ)** |

| | | |
|---|---|---|
| (ಇ) | ರಾಜ್ಯದ ಸರ್ಕಾರಿ ಮತ್ತು ಅನುದಾನಿತ ಪದವಿ ಕಾಲೇಜುಗಳಲ್ಲಿ ಬೋಧಕ ಮತ್ತು ಬೋಧಕೇತರ ಎಷ್ಟು ಹುದ್ದೆಗಳು ಖಾಲಿ ಇದೆ; ಆ ಹುದ್ದೆಗಳನ್ನು ತುಂಬಲು ಸರ್ಕಾರದ ಕ್ರಮವೇನು; | ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಬರುವ **ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ** ಖಾಲಿ ಇರುವ ಬೋಧಕ ಹುದ್ದೆಗಳ ಸಂಖ್ಯೆ:1692 ಮತ್ತು ಬೋಧಕೇತರ ಹುದ್ದೆಗಳ ಸಂಖ್ಯೆ:3529.<br><br>ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿನ 1242 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ವಿಶೇಷ ನೇಮಕಾತಿ ನಿಯಮಾವಳಿಗಳನ್ನು ರಚಿಸಲಾಗಿದ್ದು, ಸದರಿ ವಿಶೇಷ ನೇಮಕಾತಿ ನಿಯಮಗಳನ್ವಯ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಆಯ್ಕೆ ಪ್ರಕ್ರಿಯೆಯನ್ನು ನಡೆಸಲು ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ/257/ಡಿಸಿಇ/2019 (ಭಾಗ-3), ದಿನಾಂಕ:15.07.2021 ರನ್ವಯ ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ವಹಿಸಲಾಗಿದೆ.<br><br>ಬೋಧಕೇತರ ಹುದ್ದೆಗಳಲ್ಲಿ ನೇರ ನೇಮಕಾತಿಯಡಿ ಖಾಲಿ ಇರುವ ಹಾಗೂ ಸರ್ಕಾರವು ಅನುಮೋದನೆ ನೀಡಿರುವ 123 ಪ್ರಥಮ ದರ್ಜೆ ಸಹಾಯಕರು, 109 ದ್ವಿತೀಯ ದರ್ಜೆ ಸಹಾಯಕರು, 02 ಶೀಘ್ರಲಿಪಿಗಾರರು, 29 ಗ್ರಂಥಾಲಯ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಉಳಿದಂತೆ, 102 ಬೆರಳಚ್ಚುಗಾರರ (ಡಾಟಾ ಎಂಟ್ರಿ ಆಪರೇಟರ್) ಮತ್ತು 1347 ಗ್ರೂಪ್-ಡಿ ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದ ಮೇಲೆ ಸೇವೆಯನ್ನು ಬಳಸಿಕೊಳ್ಳಲು ಕ್ರಮವಹಿಸಲಾಗುತ್ತಿದೆ.<br><br>ಇಲಾಖಾ ವ್ಯಾಪ್ತಿಯಲ್ಲಿ ಬರುವ **ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ** ಖಾಲಿ ಇರುವ ಬೋಧಕ ಹುದ್ದೆಗಳ ಸಂಖ್ಯೆ:6030 ಮತ್ತು ಬೋಧಕೇತರ ಹುದ್ದೆಗಳ ಸಂಖ್ಯೆ:3976.<br><br>ಸರ್ಕಾರದ ಪತ್ರ ಸಂಖ್ಯೆ:ಇಡಿ/240/ಯುಪಿಸಿ/2014, ದಿ:01.09.2017 ರನ್ವಯ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ, ಖಾಲಿ ಇರುವ ಬೋಧಕ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಿಕೊಳ್ಳಲು ಇಲಾಖಾವತಿಯಿಂದ ಕ್ರಮವಹಿಸಲಾಗುತ್ತಿತ್ತು. ಆದರೆ, ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ:ಆಇ/157/ವೆಚ್ಚ-8/2020, ದಿನಾಂಕ:10.06.2020 & ಆಇ/3/ಬಿಇಎಂ/2020, ದಿನಾಂಕ:06.07.2020 ರನ್ವಯ ಸರ್ಕಾರವು ಹೊರಡಿಸಿರುವ ಪತ್ರ ಸಂಖ್ಯೆ:ಇಡಿ/105/ಯುಪಿಸಿ/ 2020, ದಿ;29.07.2020 ಮತ್ತು ಇಡಿ/98/ ಯುಪಿಸಿ/2020, ದಿನಾಂಕ:13.08.2020 ರಲ್ಲಿ ಕೋವಿಡ್-19ರ ಹಿನ್ನೆಲೆಯಲ್ಲಿ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ.<br><br>ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ/551/ಯುಪಿಸಿ/99, ದಿನಾಂಕ: 07.08.2003 ರಲ್ಲಿ ಹೊರಡಿಸಿರುವ ಕರ್ನಾಟಕ ಶಿಕ್ಷಣ ಸಂಸ್ಥೆಗಳು, (ಕಾಲೇಜು ಶಿಕ್ಷಣ) ನಿಯಮಗಳು-2003ರ ನಿಯಮ 08(02) ರಲ್ಲಿ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ದಿ:01.03.2001ರಂದು ಹಾಗೂ ನಂತರ ವಿವಿಧ ಕಾರಣಗಳಿಂದ ತೆರವಾಗುವ ಎಲ್ಲಾ ಬೋಧಕೇತರ ಹುದ್ದೆಗಳು ಶಾಶ್ವತ ಅನುದಾನರಹಿತ ಹುದ್ದೆಗಳೆಂದು ಪರಿಗಣಿಸಲ್ಪಟ್ಟಿರುತ್ತವೆ. ಆದ್ದರಿಂದ ಅನುದಾನಿತ ಪದವಿ ಕಾಲೇಜುಗಳಲ್ಲಿ ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲು ಪ್ರಸ್ತುತ ಅವಕಾಶವಿರುವುದಿಲ್ಲ. |

| | | |
|---|---|---|
| (ಈ) | ರಾಜ್ಯದ ಸರ್ಕಾರಿ ಮತ್ತು ಅನುದಾನಿತ ಪದವಿ ಕಾಲೇಜುಗಳಲ್ಲಿ ಸೇವೆ ಸಲ್ಲಿಸುತ್ತಿರುವ/ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರ ಸಂಖ್ಯೆ ಎಷ್ಟು; ಹೊಸದಾಗಿ ಉಪನ್ಯಾಸಕರ ಹುದ್ದೆಗೆ ನೇಮಕಾತಿ ಮಾಡುವಾಗ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಉಪನ್ಯಾಸಕರ ಹುದ್ದೆಯ ನೇಮಕಾತಿಯಲ್ಲಿ ಆದ್ಯತೆ ನೀಡಲಾಗುವುದೇ? | ಸರ್ಕಾರಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ, ಸರ್ಕಾರದ ಪತ್ರ ಸಂಖ್ಯೆ:ಇಡಿ/87/ ಡಿಸಿಇ/2021, ದಿನಾಂಕ:23.04.2021 ರನ್ವಯ 2021–22ನೇ ಸಾಲಿಗೆ ಒಟ್ಟು–14183 ಅತಿಥಿ ಉಪನ್ಯಾಸಕರುಗಳ ಸೇವೆಯನ್ನು ಬಳಸಿಕೊಳ್ಳಲು ಸರ್ಕಾರವು ಅನುಮತಿ ನೀಡಿದೆ.<br><br>ಕಾಲೇಜು ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸರ್ಕಾರಿ ಪದವಿ ಕಾಲೇಜುಗಳಲ್ಲಿನ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಯು.ಜಿ.ಸಿ. ನಿಯಮಗಳನ್ವಯ ಶೇ.100 ರಷ್ಟು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅವಕಾಶವಿದ್ದು, ಹೊಸದಾಗಿ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ನೇಮಕಾತಿ ಮಾಡುವಾಗ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರನ್ನು ಸಹಾಯಕ ಪ್ರಾಧ್ಯಾಪಕರ ಹುದ್ದೆಯ ನೇಮಕಾತಿಯಲ್ಲಿ ಆದ್ಯತೆ ನೀಡಲು ಅವಕಾಶವಿರುವುದಿಲ್ಲ.<br><br>ಇಲಾಖಾ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ಯಾವುದೇ ಅತಿಥಿ ಉಪನ್ಯಾಸಕರುಗಳನ್ನು ಇಲಾಖಾ ವತಿಯಿಂದ ನೇಮಕಾತಿ ಮಾಡಿಕೊಳ್ಳಲಾಗುವುದಿಲ್ಲ. |

ಸಂಖ್ಯೆ: ಇಡಿ 330 ಯುಎನ್ಇ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉನ್ನತ ಶಿಕ್ಷಣ, ಐಟಿ & ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.